

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1235 (1443) |
| ಮಾನ್ಯ ಸದಸ್ಯರ ಹೆಸರು | ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | **10/03/2022** |
| ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಅಂತರಿಕ ಮತ್ತು ಬಾಹ್ಯ ಸಂಪನ್ಮೂಲಗಳು ಯಾವುವು; (ವಿವರವಾದ ಮಾಹಿತಿ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಾಯಿಸಲಾಗುತ್ತಿದ್ದು, ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಭಿತರಿಗಾಗಿ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿದೆ.<br><br>ಈ ಸೌಲಭ್ಯಗಳ ವಿತರಣೆಗಾಗಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಲ್ಯಾಣ ಕಾಯ್ದೆ, 1996 ರ ಪ್ರವಧಾನಗಳಡಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಿಂದ ಶೇ.1 ರಷ್ಟು ಸುಂಕ ಮೊತ್ತವನ್ನು ಸಂಪನ್ಮೂಲವಾಗಿ ಸಂಗ್ರಹಿಸಲಾಗುತ್ತಿದೆ. |
| ಆ) | ಕಳೆದ 3 ವರ್ಷಗಳಲ್ಲಿ ಮಂಡಳಿಯು ಕಾರ್ಮಿಕರ ಕಲ್ಯಾಣಕ್ಕಾಗಿ ರೂಪಿಸಿರುವ ಯೋಜನೆಗಳು ಯಾವುವು; ಸದರಿ ಯೋಜನೆಗೆ ಭರಿಸಲಾದ ಮೊತ್ತವೆಷ್ಟು; (ವರ್ಷವಾರು ಯೋಜನೆವಾರು ವಿವರ ನೀಡುವುದು) | ಕಳೆದ ಮೂರು ವರ್ಷದಲ್ಲಿ ಮಂಡಳಿಯ ನೋಂದಾಯಿತ ಫಲಾನುಭವಿಗಳಿಗೆ ರೂಪಿಸಿರುವ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ವಿವರವನ್ನು <u>**ಅನುಬಂಧ-01**</u> ರಲ್ಲಿ ನೀಡಲಾಗಿದೆ.<br><br>ಇದಲ್ಲದೇ, ಕೋವಿಡ್-19 ರ ಹಿನ್ನಲೆಯಲ್ಲಿ ಮೊದಲನೇ ಆಲೆಯ ಹಿನ್ನಲೆಯಲ್ಲಿ ವಿಧಿಸಿದ ಲಾಕ್‌ಡೌನ್ ನಿಂದಾಗಿ ಸಂಕಷ್ಟಕ್ಕೊಳಗಾದ 16,48,431 ಕಾರ್ಮಿಕರಿಗೆ ತಲಾ ರೂ.5,000/- ದಂತೆ ರೂ.824.21/- ಕೋಟಿ ಮೊತ್ತವನ್ನು ಒಂದು ಬಾರಿ ಪರಿಹಾರವಾಗಿ ನೀಡಲಾಗಿರುತ್ತದೆ. ಅದೇ ರೀತಿ ಎರಡನೇ ಆಲೆಯ ಸಂಧರ್ಭದಲ್ಲಿ ತಲಾ ರೂ.3000/- ಗಳಂತೆ **19,39,607** ಲಕ್ಷ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ರೂ.581.88/- ಕೋಟಿಗಳನ್ನು ಫಲಾನುಭವಿಗಳ ಖಾತೆಗೆ ಡಿಬಿಟಿ (DBT) ಮೂಲಕ ಜಮಾ ಮಾಡಲಾಗಿರುತ್ತದೆ.<br><br>ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ವಿತರಣೆಗಾಗಿ ಮತ್ತು ಕೋವಿಡ್-19 ರ ಒಂದನೇ ಮತ್ತು ಎರಡನೇ ಆಲೆ ಸಂದರ್ಭದಲ್ಲಿ ಪರಿಹಾರ ವಿತರಣೆಗಾಗಿ ರೂ. 3039,66,77,783/-ಗಳಷ್ಟು ಮೊತ್ತವನ್ನು ಮಂಡಳಿಯ ಸುಂಕ ನಿಧಿಯಿಂದ ಭರಿಸಲಾಗಿದೆ.<br><br>ಕಳೆದ ಮೂರು ವರ್ಷದಲ್ಲಿ ವಿವಿಧ ಸೌಲಭ್ಯಗಳಡಿ ವಿತರಿಸಿದ ವರ್ಷವಾರು ಮತ್ತು ಯೋಜನಾವಾರು ಮಾಹಿತಿಯನ್ನು <u>ಅನುಬಂಧ-02</u> ರಲ್ಲಿ ನೀಡಲಾಗಿದೆ. |

| | | |
|---|---|---|
| ಇ) | ಯೋಜನೆಗಳ ಪ್ರಯೋಜನ ಪಡೆದ ಫಲಾನುಭವಿಗಳ ಸಂಖ್ಯೆಯೆಷ್ಟು; (ವಿಧಾನಸಭಾ ಕ್ಷೇತ್ರಾವಾರು ಅಂಕಿ-ಅಂಶಗಳ ಮಾಹಿತಿ ನೀಡುವುದು) | ಈ ಸೌಲಭ್ಯಗಳಡಿ ಕಳೆದ ಮೂರು ವರ್ಷದಲ್ಲಿ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿ **5,00,382** ಫಲಾನುಭವಿಗಳು ಮಂಡಳಿಯವತಿಯಿಂದ ಸಹಾಯ ಧನ ಪಡೆಯಲಾಗಿದ್ದು, ವರ್ಷವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ.<br><br>ಮಂಡಳಿಯಲ್ಲಿ ವಿಧಾನಸಭಾ ಕ್ಷೇತ್ರಾವಾರು ಅಂಕಿ ಅಂಶವನ್ನು ನಿರ್ವಹಿಸಿರುವುದಿಲ್ಲ. |
| ಈ) | ಮಂಡಳಿಗೆ ಮಂಜೂರಾದ ಹುದ್ದೆಗಳೆಷ್ಟು; ಅಗತ್ಯವಿರುವ ಹುದ್ದೆಗಳೆಷ್ಟು; ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲಾಗಿದೆ; ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು; (ಹುದ್ದೆಗಳ ವಿವರಗಳೊಂದಿಗೆ ಖಾಯಂಗುತ್ತಿಗೆ ಹಾಗೂ ಹೊರಗುತ್ತಿಗೆ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಅಂಕಿ-ಅಂಶಗಳ ಸಂಪೂರ್ಣ ಮಾಹಿತಿ ಒದಗಿಸುವುದು) | ದಿನಾಂಕ:22-06-2020 ರಂದು ಮಂಡಳಿಯ ವೃಂಧ ಮತ್ತು ನೇಮಕಾತಿ ನಿಯಮಗಳನ್ನು ಜಾರಿಗೆ ತಂದು 643 ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಈ ಹುದ್ದೆಗಳಲ್ಲಿ ನಿಯೋಜನೆಯ ಮೇಲೆ 19 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ದಿನಾಂಕ: 24-02-2022 ರಂದು ಮಂಡಳಿಗೆ 191 ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದಿಂದ ಅನುಮೋದನೆ ನೀಡಲಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಮುಂದುವರೆದು, ಪ್ರಸ್ತುತ ಮಂಡಳಿಯ ಎಲ್ಲಾ ಕೆಲಸ ಕಾರ್ಯಗಳನ್ನು ಏಜೆನ್ಸಿಯ ಮೂಲಕ ಹೊರಗುತ್ತಿಗೆ ಆಧಾರದಲ್ಲಿ ನಿಯೋಜಿಸಿಕೊಂಡಿರುವ ಸಿಬ್ಬಂದಿಗಳ ಮೂಲಕ ನಿರ್ವಹಿಸಲಾಗುತ್ತಿದೆ. ಹೊರಗುತ್ತಿಗೆ ಆಧಾರದಲ್ಲಿ ನಿಯೋಜಿಸಿಕೊಂಡಿರು ಸಿಬ್ಬಂದಿಗಳ ವಿವರ ಈ ಕೆಳಕಂಡಂತ್ತಿದೆ.<br><br>ಮಂಡಳಿಯ ಕೇಂದ್ರ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹೊರಗುತ್ತಿಗೆ ಸಿಬ್ಬಂಧಿಗಳು: 67<br>ಕಾರ್ಮಿಕ ಇಲಾಖೆಯ ಕ್ಷೇತ್ರ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹೊರಗುತ್ತಿಗೆ ಸಿಬ್ಬಂಧಿಗಳು: ಎಕ್ಸಿಕ್ಯೂಟಿವ್ 54; ಡೆಟಾ ಎಂಟ್ರಿ ಆಪರೇಟರ್‌ಗಳು 397 |
| ಉ) | ಮಂಡಳಿಯಲ್ಲಿನ ಉಳಿಕೆ ಮೂಲ ವೃಂದ ಮತ್ತು ಕಲ್ಯಾಣ ಕರ್ನಾಟಕ ವೃಂದ ಹುದ್ದೆಗಳ ನೇಮಕಾತಿ ವಿಧಾನದಲ್ಲಿ ಅನುಸರಿಸುವ ಮಾನದಂಡಗಳೇನು? (ವಿವರವಾದ ಮಾಹಿತಿ ನೀಡುವುದು). | ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳು ಹಾಗೂ ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಮಂಡಳಿಯಲ್ಲಿನ ಉಳಿಕೆ ಮೂಲ ವೃಂದ ಮತ್ತು ಕಲ್ಯಾಣ ಕರ್ನಾಟಕ ವೃಂದ ಹುದ್ದೆಗಳ ನೇಮಕಾತಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. |

**ಕಾಇ 156 ಎಲ್‌ಇಟ 2022**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರ

## ಅನುಬಂಧ-01

## ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ** (ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. **ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯಅವಲಂಬಿತರಿಗೆ (ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆರೂ. **30,000/-** ಮತ್ತುಗಂಡು ಮಗುವಿನ ಜನನಕ್ಕೆ**ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆವೆಚ್ಚ:ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತುದ್ವಿತೀಯಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷಅವಧಿಗೆ ಒಳಪಟ್ಟು |

| ತಾಂತ್ರೀಕ/ ವೈದ್ಯಕೀಯಎನ್ಇಇಟಿಅಥವಾ ಕೆಸಿಇಟಿ | | |
|---|---|---|
| 12 | ಬಿಇ / ಬಿ.ಟೆಕ್ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ ಕೋರ್ಸ್ನಗರಿಷ್ಠ 2 ವರ್ಷಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್) | ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್ಎಸ್ / ಬಿಡಿಎಸ್ /ಬಿಹೆಚ್ಎಮ್ಎಸ್ಕೋರ್ಸ್ಗೆಅಥವಾಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್ | ರೂ.60,000 (ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್ ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್ಐಟಿ/ ಐಐಎಸ್ಇಆರ್/ ಎಐಐಎಮ್ಎಸ್ /ಎನ್ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋಧನಾ ಶುಲ್ಕ |

12. ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಭಿತರಿಗೆರೂ.300/- ರಿಂದರೂ.10,000/-ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿರೂ.5,00,000/-, ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ ರೂ.2,00,000/- ಮತ್ತುಭಾಗಶಃ ಶಾಶ್ವತದುರ್ಬಲತೆಯಾದಲ್ಲಿ ರೂ.1,00,000/-
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದತೊಂದರೆಗೆ ಸಂಬಂಧಿತಚಿಕಿತ್ಸೆ, ಮೂತ್ರ ಪಿಂಡದಲ್ಲಿನಕಲ್ಲುತೆಗೆಯುವಚಿಕಿತ್ಸೆ, ಮೆದುಳಿನ ರಕ್ತಸ್ರಾವದಚಿಕಿತ್ಸೆ, ಅಲ್ಸರ್‌ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್‌ಚಿಕಿತ್ಸೆ, ಇತರೆಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ
15. ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್): ಫಲಾನುಭವಿ ಅಥವಾಅವರಇಬ್ಬರು ಮಕ್ಕಳ ಮದುವೆಗೆತಲಾ ರೂ.50,000/-
16. **ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪಾರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಪ್ರತಿಷ್ಠಿತ ಸಂಸ್ಥೆಗಳಿಂದ ತರಬೇತಿ ಮತ್ತುಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲುತಗಲುವ ವೆಚ್ಚವನ್ನು ಮಂಡಳಿವತಿಯಿಂದ ಭರಿಸಲಾಗುವುದು.**
17. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತಕಟ್ಟಡಕಾರ್ಮಿಕರಿಗೆ
18. ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ: ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿತೊಡಗಿರುವ ನೋಂದಾಯಿತಕಾರ್ಮಿಕರಇಬ್ಬರು ಮಕ್ಕಳಿಗೆ ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
19. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕರೂ.6,000/- ಗಳ ಸಹಾಯಧನ.

## ಅನುಬಂಧ-02

## 2018-19, 2019-20 ಮತ್ತು 2020-21ರ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ವಿವರ

| ಸೌಲಭ್ಯಗಳ ವಿವರ | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕಧನಸಹಾಯ | 95,637 | 53,32,79,365 | 1,25,403 | 72,47,88,917 | 1,15,538 | 86,93,66,430 | 3,36,578 | 2,12,74,34,712 |
| ಮದುವೆಧನಸಹಾಯ | 11,380 | 47,58,75,000 | 10,966 | 45,35,96,000 | 16,183 | 41,97,30,000 | 38,529 | 1,34,92,01,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 2,208 | 11,72,82,000 | 3,674 | 19,86,41,000 | 3,342 | 18,07,06,000 | 9,224 | 49,66,29,000 |
| ಪ್ರಮುಖ ವೈದ್ಯಕೀಯ | 530 | 1,28,29,473 | 778 | 2,26,68,307 | 1,235 | 4,67,00,314 | 2,543 | 8,21,98,094 |
| ಅಪಘಾತ ಪರಿಹಾರ | 58 | 1,37,81,000 | 116 | 3,19,57,000 | 129 | 2,20,59,000 | 303 | 6,77,97,000 |
| ನೊಂದಾಯಿತರಲ್ಲದಕಟ್ಟಡಕಾರ್ಮಿಕರ ಮರಣ ಪರಿಹಾರ | 0 | 0 | 0 | 0 | 14 | 29,00,000 | 14 | 29,00,000 |
| ಹೆರಿಗೆಧನಸಹಾಯ | 552 | 91,60,000 | 572 | 1,19,30,174 | 81 | 16,50,000 | 1,205 | 2,27,40,174 |
| ವೈದ್ಯಕೀಯ ವೆಚ್ಚ | 192 | 55,92,698 | 95 | 20,19,557 | 212 | 25,30,550 | 499 | 1,01,42,805 |
| ಉಪಕರಣಖರೀದಿಗೆ ಸಾಲ | 0 | 0 | 0 | 0 | 0 | 0 | 0 | 0 |
| ಪಿಂಚಣಿ ಸೌಲಭ್ಯ | 520 | 1,20,52,000 | 627 | 2,30,26,000 | 643 | 2,86,24,000 | 1,790 | 6,37,02,000 |
| ದುರ್ಬಲತೆ ಪಿಂಚಣಿ | 7 | 12,14,000 | 18 | 29,99,000 | 5 | 12,90,000 | 30 | 55,03,000 |
| ಕುಟುಂಬ ಪಿಂಚಣಿ | 0 | 0 | 0 | 0 | 5 | 24,000 | 5 | 24,000 |
| ಅನಿಲ ಭಾಗ್ಯ | 4,055 | 0 | 0 | 0 | 0 | 0 | 4,055 | 0 |
| ಶ್ರಮ ಸಾಮರ್ಥ್ಯ | 3,780 | 14,71,43,192 | 0 | 0 | 40,385 | 5,71,47,550 | 44,165 | 20,42,90,742 |
| ಬಿಎಂಟಿಸಿ ಬಸ್ ಪಾಸ್ | 1,602 | | 2,996 | 5,94,300 | 50,969 | 59,49,39,450 | 55,567 | 59,55,33,750 |
| ವಸತಿ ಸೌಲಭ್ಯ | 0 | 0 | 5,129 | 76,00,00,000 | 0 | 0 | 5,129 | 76,00,00,000 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 501 | 30,00,000 | 218 | 57,63,296 | 719 | 87,63,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 27 | 1,62,000 | 27 | 1,62,000 |
| **ಒಟ್ಟು** | **1,20,521** | **1,32,82,08,728** | **1,50,875** | **2,23,52,20,255** | **2,28,986** | **2,23,35,92,590** | **5,00,382** | **5,79,70,21,573** |